# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 377

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 18-02-2022.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ತೋಟಗಾರಿಕೆ ಇಲಾಖೆಯು ಕಳೆದ 02 ವರ್ಷಗಳಿಂದ ರೈತರಿಗೆ ಹನಿ ನೀರಾವರಿ ಯೋಜನೆಯ ಸಬ್ಸಿಡಿ ಬಿಡುಗಡೆ ಮಾಡದ ಪರಿಣಾಮ 23,500ಕ್ಕೂ ಹೆಚ್ಚು ಅರ್ಜಿಗಳು ಬಾಕಿ ಇದ್ದು, ಸುಮಾರು ರೂ.176 ಕೋಟಿ ಅನುದಾನ ಬಿಡುಗಡೆಯಾಗದೇ, ಸದರಿ ಅನುದಾನವನ್ನು ತ್ವರಿತವಾಗಿ ಬಿಡುಗಡೆಗೊಳಿಸಲು ಸರ್ಕಾರವು ಶೀಘ್ರ ಕ್ರಮ ವಹಿಸುವುದೇ; ( ಮಾಹಿತಿ ಒದಗಿಸುವುದು) | ರಾಜ್ಯದ ತೋಟಗಾರಿಕೆ ಇಲಾಖೆಯು ಕಳೆದ 02 ವರ್ಷಗಳಲ್ಲಿ ರೈತರಿಗೆ ಹನಿ ನೀರಾವರಿ ಯೋಜನೆಯ ಸಹಾಯಧನವನ್ನು ವಿತರಿಸಲಾಗಿರುತ್ತದೆ. ಬಾಕಿ ಇರುವ ಅರ್ಜಿಗಳನ್ನು ವಿಲೇ ಮಾಡಲು ಕ್ರಮಕೈಗೊಳ್ಳಲಾಗಿದೆ. ಹನಿ ನೀರಾವರಿ ಯೋಜನೆಯಡಿ ರೂ.277.01 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದ್ದು, ಇದರಲ್ಲಿ ಬಾಕಿ ಅರ್ಜಿಗಳು ಮತ್ತು ಹೊಸ ಅರ್ಜಿಗಳ ವಿಲೇ ಮಾಡಲಾಗುತ್ತಿದೆ. |
| ಆ | ಹನಿ ನೀರಾವರಿ ಅಳವಡಿಸಿದ ರೈತರಿಗೆ ಈ ಹಿಂದೆ ಸಂಸ್ಥೆಗಳ ಮೂಲಕ ಖಜಾನೆಯಿಂದ ಸಬ್ಸಿಡಿ ಹಣ ಭರಿಸುತ್ತಿದ್ದು, ಈ ವೇಳೆ ಕೆಲ ತೋಟಗಾರಿಕೆ ಇಲಾಖೆಗಳ ಅಧಿಕಾರಿಗಳು ಹಾಗೂ ಸಂಸ್ಥೆಗಳು ನಕಲಿ ದಾಖಲೆ ಸೃಷ್ಟಿಸಿ, ರೈತರಿಗೂ ಹಾಗೂ ಸರ್ಕಾರಕ್ಕೂ ವಂಚನೆ ಮಾಡುತ್ತಿರುವುದು ನಿಜವೆ; | ರೈತರು ಇಚ್ಛಾನುಸಾರ ತಯಿಂದ ಅಳವಡಿಸಿಕೊಳ್ಳುವ ಹನಿ ನೀರಾವರಿ ಘಟಕಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಮಾರ್ಗಸೂಚಿಯನ್ವಯ ಸಹಾಯಧನವನ್ನು ನೀಡಿ ರಾಜ್ಯಾದಂತ ಅನುಷ್ಠಾನಗೊಳಿಸಲಾಗುತ್ತಿದೆ. ಮಾರ್ಗಸೂಚಿಯ ನಿಯಮಾನುಸಾರ ಹನಿ ನೀರಾವರಿ ಘಟಕಗಳನ್ನು ಅಳವಡಿಸಿಕೊಂಡಿರುವ ರೈತರ ತಾಕುಗಳ ಸ್ಥಳ ಪರಿಶೀಲನೆ ಕೈಗೊಂಡು ರೈತರು ಪೂರ್ಣ ಘಟಕ ವೆಚ್ಚವನ್ನು ಪಾವತಿಸಿದಲ್ಲಿ ರೈತರ ಬ್ಯಾಂಕ್ ಖಾತೆಗೆ ನೇರವಾಗಿ ಸಹಾಯಧನ ಪಾವತಿಸಲಾಗುತ್ತಿದೆ. ರೈತರು ಹನಿ ನೀರಾವರಿ ಕಂಪನಿಗಳಿಗೆ ಪೂರ್ಣ ಹಣ ಪಾವತಿಸಲು ಸಾಧ್ಯವಿಲ್ಲದಿದ್ದಲ್ಲಿ, ರೈತರು ಬ್ಯಾಂಕ್ ಖಾತೆಯಿಂದ ಕಂಪನಿಗಳಿಗೆ ರೈತರ ವಂತಿಕೆಯನ್ನು ಮಾತ್ರ ಪಾವತಿಸಿ, ಹನಿ ನೀರಾವರಿ ಘಟಕವನ್ನು ಅಳವಡಿಸಿದ ಕಂಪನಿಗೆ ಉಳಿಕೆ ಮೊತ್ತವನ್ನು ಪಾವತಿಸುವ ಬಗ್ಗೆ ನಿರಾಕ್ಷೇಪಣಾ ಪತ್ರ (No objection Certificate-NOC) ವನ್ನು ನೀಡಿದ್ದಲ್ಲಿ ಸಹಾಯಧನವನ್ನು ಕಂಪನಿಗೆ ಪಾವತಿಸಲಾಗುತ್ತಿದೆ. ಈ ಎಲ್ಲಾ ಪ್ರಕ್ರಿಯೆಯನ್ನು HASIRU ತಂತ್ರಾಂಶದಲ್ಲಿ |
| ಇ | ಸರ್ಕಾರವು ಇದನ್ನು ಪರಿಶೀಲಿಸದಿರುವುದರಿಂದ ಅರ್ಹ ಫಲಾನುಭವಿ ರೈತರ ಅರ್ಜಿಗಳ ಜೊತೆಗೆ ಸಂಸ್ಥೆಗಳು ಸಲ್ಲಿಸಿದ ನಕಲಿ ಅರ್ಜಿಗಳನ್ನು ಪತ್ತೆ ಮಾಡಲು ಕಷ್ಟವಾಗಿರುವುದಲ್ಲವೇ; ಈ ಕುರಿತಂತೆ ಸರ್ಕಾರವು ಅರ್ಹ ಫಲಾನುಭವಿ ರೈತರನ್ನು ಗುರುತಿಸುವ ನಿಟ್ಟಿನಲ್ಲಿ ನಿಯಮಾವಳಿಗಳನ್ನು ಮಾರ್ಪಾಡು ಮಾಡಿ ಸೂಕ್ತ ನಿರ್ಧಾರ/ಆದೇಶ ಕೈಗೊಳ್ಳುವುದೇ? (ಸಂಪೂರ್ಣ ಮಾಹಿತಿ ಒದಗಿಸುವುದು) | |

| | | |
|---|---|---|
| | | ಕೈಗೊಳ್ಳಲಾಗುತ್ತಿದೆ.<br><br>ಕೆಲ ತೋಟಗಾರಿಕೆ ಇಲಾಖೆಗಳ ಅಧಿಕಾರಿಗಳು ಹಾಗೂ ಸಂಸ್ಥೆಗಳು ನಕಲಿ ದಾಖಲೆ ಸೃಷ್ಟಿಸಿ, ರೈತರಿಗೂ ಹಾಗೂ ಸರ್ಕಾರಕ್ಕೂ ವಂಚನೆ ಮಾಡುತ್ತಿರುವುದು ಇಲಾಖೆ ಗಮನಕ್ಕೆ ಬಂದಿರುವುದಿಲ್ಲ. |

HORTI / 73 / HGM / 2022

(ಮುನಿರತ್ನ)

ತೋಟಗಾರಿಕೆ ಹಾಗೂ ಯೋಜನೆ,

ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು